# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| 1 | ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 1905 |
| 2 | ಸದಸ್ಯರ ಹೆಸರು | ಶ್ರೀ ಕೆ.ಎ.ತಿಪ್ಪೇಸ್ವಾಮಿ<br>(ನಾಮನಿರ್ದೇಶನ ಹೊಂದಿದವರು) |
| 3 | ಉತ್ತರಿಸಬೇಕಾದ ದಿನಾಂಕ | 16.03.2022 |
| 4 | ಉತ್ತರಿಸುವ ಸಚಿವರು | ಕಂದಾಯ ಸಚಿವರು |

<table>
<tr><th>ಕ್ರ ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಕರ್ನಾಟಕ ಏಕೀಕರಣದಲ್ಲಿ ಸೇರ್ಪಡೆಯಾದ ಐದು ಪ್ರಾಂತ್ಯಗಳಾದ ಹಳೆ ಮೈಸೂರು, ಬಾಂಬೆ ಕರ್ನಾಟಕ, ಹೈದರಾಬಾದ್ - ಕರ್ನಾಟಕ, ಮದ್ರಾಸು ಪ್ರಾಂತ್ಯದ ಬಳ್ಳಾರಿ ಮತ್ತು ಕೊಡಗು ಪ್ರಾಂತ್ಯಗಳಲ್ಲಿ ಮೂಲ ಸರ್ವೆ ಮತ್ತು ತದ ನಂತರದ ಮರು ಸರ್ವೆಗಳನ್ನು ಯಾವ ವರ್ಷಗಳಲ್ಲಿ ನಿರ್ವಹಿಸಲಾಗಿದೆ; (ಪ್ರಾಂತ್ಯವಾರು ಮತ್ತು ವರ್ಷ ವಾರು ಪೂರ್ಣ ವಿವರ ನೀಡುವುದು)</td><td>ಕರ್ನಾಟಕ ಏಕೀಕರಣದಲ್ಲಿ ಸೇರ್ಪಡೆಯಾದ ರಾಜ್ಯದ ವಿವಿಧ ಪ್ರಾಂತ್ಯಗಳಲ್ಲಿ ಭೂಮಿಗಳನ್ನು ಕೆಳಕಂಡ ವರ್ಷಗಳಲ್ಲಿ ಮೂಲ ಸರ್ವೆ ಮತ್ತು ರೀಸರ್ವೆ ಮಾಡಲಾಗಿರುತ್ತದೆ
<table>
<tr><th>ಕ್ರ. ಸಂ.</th><th>ಪ್ರಾಂತ್ಯ</th><th>ಮೂಲ ಸರ್ವೇ</th><th>ರಿ-ಸರ್ವೇ</th></tr>
<tr><td>1</td><td>ಹಳೇ ಮೈಸೂರು ಪ್ರಾಂತ್ಯ</td><td>1863-1899</td><td>1900-1917</td></tr>
<tr><td>2</td><td>ಮುಂಬೈ ಪ್ರಾಂತ್ಯ</td><td>1840-1863</td><td>1906-1921</td></tr>
<tr><td>3</td><td>ಮದರಾಸು ಪ್ರಾಂತ್ಯ</td><td>1863-1904</td><td>1923-1935</td></tr>
<tr><td>4</td><td>ಹೈದರಾಬಾದ್ ಪ್ರಾಂತ್ಯ</td><td>1875-1888</td><td>1906-1916</td></tr>
<tr><td>5</td><td>ಕೊಡಗು ಪ್ರಾಂತ್ಯ</td><td>1806-1816</td><td>1906-1912</td></tr>
</table>
</td></tr>
<tr><td>ಆ)</td><td>ಕರ್ನಾಟಕ ಕಂದಾಯ ಕಾಯ್ದೆ – 1964 ರ ಪ್ರಕಾರ ಪ್ರತಿ 30 ವರ್ಷಗಳಿಗೊಮ್ಮೆ ಜಮೀನುಗಳ ಮರು ಸರ್ವೆ (Re-Survey) ಆಗಬೇಕೆಂಬ ನಿಯಮ ಇರುವುದು ನಿಜವೇ; ಹಾಗಿದ್ದಲ್ಲಿ, ಕರ್ನಾಟಕ ಏಕೀಕರಣಗೊಂಡ ನಂತರ ನಗರ ಸರ್ವೆ ಒಳಗೊಂಡಂತೆ ಮರು ಸರ್ವೆಯನ್ನು ಯಾವ ಯಾವ ವರ್ಷಗಳಲ್ಲಿ ಕೈಗೊಳ್ಳಲಾಗಿದೆ; ಮತ್ತು ಈ ಮರು ಸರ್ವೆಗಳಿಗೆ ತಗುಲಿದ ವೆಚ್ಚ ವೆಷ್ಟು ಮತ್ತು ದೊರೆತ ಪ್ರಯೋಜನಗಳು ಯಾವುವು; (ಪೂರ್ಣ ವಿವರ ನೀಡುವುದು)</td><td>ಕರ್ನಾಟಕ ಭೂಕಂದಾಯ ಅಧಿನಿಯಮ 1964 ಕಲಂ 115 ರನ್ವಯ ಕಂದಾಯ ವ್ಯವಸ್ಥೆಯು ಮೂವತ್ತು ವರ್ಷಗಳ ಅವಧಿಯವರೆಗೆ ಜಾರಿಯಲ್ಲಿರುತ್ತದೆ. ಕಂದಾಯ ವ್ಯವಸ್ಥೆಯು ಪರಿಷ್ಕರಣೆಯು ಸೂಕ್ತವಲ್ಲವೆಂದು ಕಂಡುಬಂದಲ್ಲಿ ಅಥವಾ ಕಂದಾಯ ವ್ಯವಸ್ಥೆಯನ್ನು ಜಾರಿಗೊಳಿಸುವುದು ವಿಳಂಬವಾದಾಗ ತತ್ಕಾಲದಲ್ಲಿ ಜಾರಿಯಲ್ಲಿರುವ ಕಂದಾಯ ವ್ಯವಸ್ಥೆಯ ಅವಧಿಯನ್ನು ಸೂಕ್ತವೆಂದು ಕಂಡುಬರುವಂತಹ ಅವಧಿಯವರೆಗೆ ಮುಂದುವರೆಸಬಹುದಾಗಿರುತ್ತದೆ.<br>ಏಕೀಕರಣದ ನಂತರ ರಾಜ್ಯದಲ್ಲಿ ಕೈಗೊಂಡಿರುವ ಮರುಭೂಮಾಪನ/ನಗರಮಾಪನ ಮತ್ತು ಅವುಗಳಿಗೆ ತಗುಲಿರುವ ವೆಚ್ಚದ ವಿವರ ಈ ಕೆಳಕಂಡಂತಿದೆ.
<table>
<tr><th>ವಿವರ</th><th>ತಗುಲಿರುವ ವೆಚ್ಚ (ರೂ.ಲಕ್ಷಗಳಲ್ಲಿ)</th></tr>
<tr><td>1967-74 ರ ಬೆಂಗಳೂರು, ದಾವಣಗೆರೆ ಹಾಗೂ ಕಲಬುರಗಿ ಶಹರಗಳಲ್ಲಿನ ನಗರ ಮಾಪನ.</td><td>ಇಲಾಖಾ ಸಿಬ್ಬಂದಿಗಳನ್ನು ಬಳಸಿಕೊಂಡು ನಗರ ಮಾಪನ ಭೂಮಾಪನ ಕೈಗೊಳ್ಳಲಾಗಿದೆ</td></tr>
<tr><td>2008-09 ರ ಬೆಳಗಾವಿ ಶಹರದ ವಿಸ್ತೃತ ನಗರ ಮಾಪನ.</td><td>35.00</td></tr>
<tr><td>2009-13 ರಲ್ಲಿ 12 ನೇ ಹಣಕಾಸು ಆಯೋಗದಡಿಯಲ್ಲಿ ಕೈಗೊಂಡಿರುವ ನಲ್ಲೆಕಾಮನಹಳ್ಳಿ-ಯಲ್ಲೂರು-ಶನಿವಾರಸಂತೆ, ಚಿಕ್ಕಜೋಗಿಹಳ್ಳಿ - ಕಾಡ್ಲೆ-ಯಳಂದೂರು-ನಿಡಗುಂಟಿ ದಾಂಡೇಲಿ -ಚಿಕ್ಕಸೋಗೂರು ಪಟ್ಟಣಗಳಲ್ಲಿನ ನಗರ ಮಾಪನ.</td><td>56.59</td></tr>
</table>
</td></tr>
</table>

| | |
|---|---|
| 2010-12 ರ ಬೆಳಗಾವಿ-ಸಂಕೇಶ್ವರ-ಸವದತ್ತಿ - ಉಪ್ಪಿನ ಬೆಟಗೇರಿ-ಮೊರಬ - ರೋಣ ಪಟ್ಟಣಗಳ ನಗರ ಮಾಪನ. | |
| 2010 ನೇ ಸಾಲಿನಲ್ಲಿ 12 ನೇ ಹಣಕಾಸು ಆಯೋಗದಡಿಯಲ್ಲಿ ಕೈಗೊಂಡಿರುವ ಬೆಂಗಳೂರು ನಗರ ಮತ್ತು ಸುತ್ತಮುತ್ತಲ 5 ನಗರ/ಪಟ್ಟಣಗಳಲ್ಲಿ ನಗರ ಮಾಪನ. | 13.432 |
| 2009 ರಿಂದ ಮೈಸೂರು, ಶಿವಮೊಗ್ಗ, ಮತ್ತು ಮಂಗಳೂರು ನಗರಗಳಲ್ಲಿ ಯುಪಿಓಆರ್ ಯೋಜನೆಯಡಿ ಕೈಗೊಳ್ಳಲಾಗುತ್ತಿರುವ ನಗರಮಾಪನ. | 1546.93 |

**ಮರುಭೂಮಾಪನ**

| ವಿವರ | ತಗುಲಿದ ವೆಚ್ಚ (ರೂ.ಲಕ್ಷಗಳಲ್ಲಿ) |
|---|---|
| 2002-05 ರಲ್ಲಿ ಮಂಡ್ಯ ಜಿಲ್ಲೆ ಮದ್ದೂರು ತಾಲ್ಲೂಕಿನ ಆತಗೂರು ಹೋಬಳಿಯಲ್ಲಿ ಕೈಗೊಂಡಿರುವ ಮರುಭೂಮಾಪನ. | 99.99 |
| 2009-13 ರಲ್ಲಿ ಬೆಳಗಾವಿ ಜಿಲ್ಲೆಯ 32 ಗ್ರಾಮಗಳಲ್ಲಿ ಕೈಗೊಂಡಿರುವ ಮರು ಭೂಮಾಪನ. | 64.44 |
| 2012 ರಲ್ಲಿ ರಾಜ್ಯದ 14 ಜಿಲ್ಲೆಗಳಲ್ಲಿ ಪ್ರತಿ ಜಿಲ್ಲೆಯ 2 ಗ್ರಾಮಗಳಲ್ಲಿ ಪ್ರಾಯೋಗಿಕವಾಗಿ ಕೈಗೊಂಡಿರುವ ಮರು ಭೂಮಾಪನ. | 158.83 |

**ನಗರಮಾಪನ/ಮರುಮಾಪನ ಕಾರ್ಯದಿಂದಾಗುವ ಉಪಯೋಗಗಳು:**

1. ಯಾವುದೇ ಪ್ರದೇಶದಲ್ಲಿ ಮರು ಭೂಮಾಪನ ಕೈಗೊಳ್ಳುವುದರಿಂದ ಜಮೀನಿನಲ್ಲಿಯ ಭೌಗೋಳಿಕ ಬದಲಾವಣೆ ಮತ್ತು ಬದಲಾದ ಹಕ್ಕಿಗನುಗುಣವಾಗಿ ಜಮೀನಿನ ಗಡಿಗಳಲ್ಲಿ ಆಗಿರುವ ಬದಲಾವಣೆಗಳನ್ನು ದಾಖಲಿಸಬಹುದಾಗಿದೆ.
2. ಬದಲಾವಣೆಗೆ ಅನುಸಾರವಾಗಿ ಕಂದಾಯ ವ್ಯವಸ್ಥೆಯನ್ನು ಜಾರಿಗೊಳಿಸಿ ವಸ್ತುಸ್ಥಿತಿಯಂತೆ ಹೊಸ ಭೂದಾಖಲೆಗಳನ್ನು ಸೃಜಿಸಲಾಗುತ್ತದೆ.
3. ನಗರ ಮಾಪನ ಜಾರಿಗೊಳಿಸುವುದರಿಂದ ನಗರ ಪ್ರದೇಶಗಳಲ್ಲಿ ಆಸ್ತಿಗಳ ಗಡಿ, ಹಕ್ಕು ಮತ್ತು ಋಣದ ಕುರಿತು ದಾಖಲೆಗಳನ್ನು ಪರಿಶೀಲಿಸಿ ಸ್ಪಷ್ಟ ದಾಖಲೆ ತಯಾರಿಸಿ ನಿರ್ವಹಿಸ ಬಹುದಾಗಿದೆ.
4. ರಾಜ್ಯದಲ್ಲಿ ಜಮೀನು/ಆಸ್ತಿಯ ಕುರಿತಾದ ವ್ಯಾಜ್ಯಗಳು ಕಡಿಮೆಯಾಗಿ ಸಮಾಜದಲ್ಲಿ ಶಾಂತಿ ನೆಲಸಲು ಅನುಕೂಲವಾಗುತ್ತದೆ.

| | | |
|---|---|---|
| ಇ) | ರಾಜ್ಯದಲ್ಲಿ ಡ್ರೋಣ್ ಮುಖೇನ ಮರು ಸರ್ವೆಯನ್ನು ಕೈಗೊಳ್ಳಲು ಸರ್ಕಾರ ನಿರ್ಧರಿಸಿದೆಯೇ; (ಹಾಗಿದ್ದಲ್ಲಿ, ಪೂರ್ಣ ವಿವರ ನೀಡುವುದು) | ಹೌದು.<br>2017-18ನೇ ಸಾಲಿನಲ್ಲಿ ರಾಜ್ಯದ 5 ಜಿಲ್ಲೆಗಳಾದ ರಾಮನಗರ, ತುಮಕೂರು, ಹಾಸನ, ಬೆಳಗಾವಿ ಮತ್ತು ಉತ್ತರಕನ್ನಡ ಜಿಲ್ಲೆಗಳು ಮತ್ತು ಬೆಂಗಳೂರು ನಗರ ಜಿಲ್ಲೆಗಳಲ್ಲಿನ ಒಟ್ಟು 51,000 ಚ.ಕಿ.ಮೀ ಪ್ರದೇಶವನ್ನು ಡ್ರೋನ್ ಆಧಾರಿತ ಭೂಮಾಪನ ಕಾರ್ಯವನ್ನು ಭಾರತೀಯ ಸರ್ವೇಕ್ಷಣಾ ಸಂಸ್ಥೆಯ ಸಹಯೋಗದೊಂದಿಗೆ |

| | | |
|---|---|---|
| | | ಕೈಗೊಳ್ಳಲಾಗುತ್ತಿದೆ. ಮುಂದುವರೆದು ಪ್ರಸಕ್ತ ಸಾಲಿನಲ್ಲಿ ರಾಜ್ಯದ ಉಳಿದ 26 ಜಿಲ್ಲೆಗಳಲ್ಲಿನ 1.40 ಲಕ್ಷ ಚ.ಕಿ.ಮೀ ಪ್ರದೇಶವನ್ನು ಸಹಾ ದ್ರೋಣ್/ವೈಮಾನಿಕ ಸರ್ವೆ ಕಾರ್ಯವನ್ನು ರೂ.287 ಕೋಟಿ ವೆಚ್ಚದಲ್ಲಿ ಅನುಷ್ಠಾನಗೊಳಿಸಲು ಅನುಮೋದನೆ ನೀಡಲಾಗಿದೆ. ಪ್ರಸ್ತುತ ಟೆಂಡರ್ ಪ್ರಕ್ರಿಯೆ ಜಾರಿಯಲ್ಲಿರುತ್ತದೆ. |
| ಈ) | ರಾಜ್ಯದಲ್ಲಿ ಈ ಹಿಂದೆ ಡ್ರೋಣ್ ಆಧಾರಿತ ಕೈಗೊಂಡ ಮರು ಸರ್ವೆಗಳು ಯಾವ ಹಂತದಲ್ಲಿವೆ ಮತ್ತು ಈ ಮರು ಸರ್ವೆಗಳನ್ನು ಯಾವ ಸಂಸ್ಥೆಗಳ ಮೂಲಕ ನಡೆಸಲಾಗಿದೆ? (ವೆಚ್ಚದ ವಿವರ ದೊಂದಿಗೆ ಪೂರ್ಣ ಮಾಹಿತಿ ನೀಡುವುದು) | ರಾಜ್ಯದಲ್ಲಿ 2018 ರಲ್ಲಿ ಡ್ರೋಣ್ ಆಧಾರಿತ ಮರು ಭೂಮಾಪನ ಕಾರ್ಯ ಪ್ರಾರಂಭಿಸಲಾಗಿದ್ದು, ರಾಜ್ಯದ್ಯಂತ 49 ಕೇಂದ್ರಗಳಲ್ಲಿ Continuously Operating Referencing Station (CORS) ಗಳನ್ನು ಸ್ಥಾಪಿಸಲಾಗಿರುತ್ತದೆ. ತುಮಕೂರು, ರಾಮನಗರ ಮತ್ತು ಬೆಂಗಳೂರು ನಗರದಲ್ಲಿ ಡ್ರೋನ್ Flying ಕಾರ್ಯವನ್ನು ಪ್ರಾರಂಭಿಸಲಾಗಿರುತ್ತದೆ. ರಾಜ್ಯದಲ್ಲಿ COVID-19 ಸಾಂಕ್ರಾಮಿಕ ರೋಗ ಹರಡುತ್ತಿದ್ದರಿಂದ ಮತ್ತು ಲಾಕ್-ಡೌನ್ ಕಾರಣದಿಂದ ಹಾಗೂ ರಾಜ್ಯದಲ್ಲಿ ಕೇಂದ್ರ ಸರ್ಕಾರದ ಸ್ವಾಮಿತ್ವ ಯೋಜನೆ ಜಾರಿ ಮಾಡುತ್ತಿರುವುದರಿಂದಾಗಿ ಮರು ಭೂಮಾಪನ ಕಾರ್ಯವನ್ನು ತಾತ್ಕಾಲಿಕವಾಗಿ ಸ್ಥಗಿತಗೊಳಿಸ ಲಾಗಿತ್ತು. ಪ್ರಸ್ತುತ ರಾಜ್ಯದಲ್ಲಿ ಡ್ರೋಣ್ ಆಧಾರಿತ ಮರು ಭೂಮಾಪನ ಕಾರ್ಯವನ್ನು ಪುನರ್ ಪ್ರಾರಂಭಿಸಲಾಗುತ್ತಿದೆ.<br><br>ಈ ಯೋಜನೆಯನ್ನು ಭಾರತೀಯ ಸರ್ವೇಕ್ಷಣಾ ಸಂಸ್ಥೆಯ ತಾಂತ್ರಿಕ ಸಹಯೋಗದೊಂದಿಗೆ ಅನುಷ್ಠಾನಗೊಳಿಸಲಾಗುತ್ತಿದೆ. ಇದಕ್ಕೆ ರೂ.76.00 ಕೋಟಿ ವೆಚ್ಚವಾಗುವುದಾಗಿ ಅಂದಾಜಿಸಲಾಗಿದ್ದು, ಇದುವರೆವಿಗೂ ರೂ 22.00 ಕೋಟಿ ಮೊತ್ತವನ್ನು ಭಾರತೀಯ ಸರ್ವೇಕ್ಷಣಾ ಸಂಸ್ಥೆಗೆ ಪಾವತಿಸಲಾಗಿರುತ್ತದೆ. |

**ಸಂಖ್ಯೆ: ಕಂಇ 83 ಎಸ್ಎಸ್ಸಿ 2022**

**(ಆರ್.ಅಶೋಕ)**
ಕಂದಾಯ ಸಚಿವರು